# ಮುತ್ತು ರತ್ನ

ಬಿ. ಎಚ್. ಶ್ರೀಧರ

ಸಾಹಿತ್ಯ ಮಂದಿರ
ಶಿರಸಿ

೧೯೮೮] [ರೂ. ೩-೦೦

# ಮುತ್ತು ರತ್ನ

ಪ್ರೊ. ಬಿ. ಎಚ್. ಶ್ರೀಧರ, ಎಂ. ಎ.,
ನಿವೃತ್ತ ಪ್ರಾಚಾರ್ಯರು.

ಸಾಹಿತ್ಯ ಮಂದಿರ
ಶಿರಸಿ

೧೯೪೮]  [ರೂ. ೩-೦೦

ಮುತ್ತು ಚಿತ್ರ (ಶಿಶುಗೀತೆಗಳ ಸಂಕಲನ)


ನಿವೃತ್ತ ಪ್ರಾಚಾರ್ಯರು,
ಶಿರಸಿ (ಉ. ಕ.)—581 402

ಪ್ರಕಾಶಕರು : ಸಾಹಿತ್ಯ ಮಂದಿರ,
ಶಿರಸಿ (ಉ. ಕ.)—581 402

ಮುದ್ರಕರು : ಸದಾನಂದ ಪ್ರಿಂಟರ್ಸ್,
ಹಳೇ ದಲಾಲ ಮಾರ್ಕೆಟ್.
ಧಾರವಾಡ—580 001

# ಪ್ರಕಾಶಕರ ಮಾತು

ಪ್ರೊ. ಬಿ. ಎಚ್. ಶ್ರೀಧರರು ಕನ್ನಡ ನಾಡಿಗೆ ಸುಪರಿಚಿತರು.

ಬಹುಮಾನವಿಜೇತ ವಿದ್ಯಾರ್ಥಿ, ಶಿಷ್ಯವತ್ಸಲ ಶಿಕ್ಷಕ, ಪ್ರತಿಭಾನ್ವಿತ ಕವಿ, ವಿಚಾರಪ್ರಚೋದಕ ಲೇಖಕ, ವಸ್ತುನಿಷ್ಠ ವಿಮರ್ಶಕ, ಪ್ರೌಢ ಅನುವಾದಕ, ವಾಚಕಬೋಧಕ ಸಂಪಾದಕ, ಸಮರ್ಥ ಆಡಳಿತಗಾರ, ನಿರ್ಭಿಡೆಯ ಸ್ಪಷ್ಟವಕ್ತಾ, ಸಂಸ್ಕೃತ-ಕನ್ನಡ-ಇಂಗ್ಲೀಷ ವಿದ್ವಾಂಸ, ನಾನಾಪ್ರಶಸ್ತಿ ಸಮನ್ವಿತ, ಉದಾರಹೃದಯಿ. ಬಹುಜನಸಮಾನ್ಯ, ಕೀರ್ತಿಶಾಲಿ ಸಂಭಾವಿತ-ಹೀಗೆ ಬಹುಮುಖಿ ವ್ಯಕ್ತಿತ್ವ ಪೂಜ್ಯ ಶ್ರೀಧರರದು, ಅದರ ಒಂದು ಮುಖದ ಅಲ್ಪಪರಿಚಯದ ಪ್ರಯತ್ನ ನಮ್ಮದು.

ಇಲ್ಲಿ ಸಂಗ್ರಹವಾಗಿರುವ ಶಿಶುಗೀತೆಗಳು ಸುಮಾರು ಮೂವತ್ತು ವರುಷಗಳ ಹಿಂದೆ ಧಾರವಾಡ ಆಕಾಶವಾಣಿಯ 'ಗಿಳಿವಿಂಡು' ಕಾರ್ಯಕ್ರಮಕ್ಕಾಗಿ ರಚಿತವಾಗಿದ್ದವು. ಬಾಲಕರೂ ಶಿಶುಗಳೂ ಧ್ವನಿಗೂಡಿಸಿ ಹಾಡಿದ್ದ ಈ ಗೀತೆಗಳು ಆಗಿನ ಕಾಲಕ್ಕೆ ಜನಪ್ರಿಯವಾಗಿದ್ದವು. ಬಳಿಕ ಕುಮಟೆಯ 'ಸುಲಭ ಸಾಹಿತ್ಯ ಪ್ರಕಾಶನ'ವು ಅವುಗಳ ಸಂಗ್ರಹ ಪ್ರಕಟಿಸಿ ಸುಮಾರು ಇಪ್ಪತ್ತು ವರುಷಗಳಾದವು.

ಇಂದಿಗೂ ಈ ಗೀತೆಗಳು ಶಿಶುಸಾಹಿತ್ಯವಾಗಿ ಉಪಯುಕ್ತವಾಗಿರುವದರಿಂದ ನಾವು ಇವುಗಳನ್ನು ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯ ಪ್ರಪಂಚ ನಮ್ಮ ಈ ಪ್ರಯತ್ನವನ್ನು ಸ್ವಾಗತಿಸಿ ನಮ್ಮನ್ನು ಪ್ರೋತ್ಸಾಹಿಸುವುದೆಂದು ನೆರೆನಂಬಿದ್ದೇವೆ.

ಪ್ರಕಟಿಸಲು ಅನುಮತಿಯಿತ್ತ ಪೂಜ್ಯ ಶ್ರೀಧರರಿಗೆ ಸಾದರ ವಂದನೆಗಳು.

ಧಾರವಾಡದ ಸದಾನಂದ ಮುದ್ರಣಾಲಯದವರಿಗೆ ಕೃತಜ್ಞತೆಗಳು,

ಗೀತಾ ಜಯಂತಿ, ೧೯೮೮

—ಪ್ರಕಾಶಕರು

# ಪರಿವಿಡಿ



# ಒಡನಾಡಿಗಳ ಓಲಗ

ನನ್ನ ಗೆಳೆಯ ರಾಜ
ನೆಲಗಡಲೆಯ ಬೀಜ
ತಿನ್ನುವಲ್ಲಿ ಮಹಾ ಶೂರ—
ಇದ್ದರೆ ಅದು ತಾಜಾ !

ನನ್ನ ಗೆಳತಿ ಶಾರದೆ
ಕಾಫಿ ಎದುರು ಬಾರದೆ
ಒಂದಕ್ಷರ ಬರೆವಳಲ್ಲ—
ಇದ್ದರೆ ಅದು ಆರದೆ !

ನನ್ನ ತಮ್ಮ ಬೋಳ
ಇಷ್ಟ ಅವಗೆ ಖಾರ !
ತಿಂದು ಬಿಟ್ಟನೆಂದರವನ
ಮಾತು ಮಹಾಪೂರ !

ನನ್ನ ತಂಗಿ ಲಿಂಬಿ
ಅವಳಿಗೆ ಹೊಸ ಅಂಗಿ
ತೊಟ್ಟರಾಟ ಮಾಡುತಾಳೆ—
ಬೋಲೋ ಬೋಲೋ ಭಂಗಿ !

ನನ್ನ ಅಕ್ಕ ಸಾತಿ
ನಾನೆ ಅವಳ ಸಾಥಿ !
ಹಾಡ ಕಲಿತರವಳಿಗಿಲ್ಲ
ಅವರ ಇವರ ಭೀತಿ !

ನನ್ನ ಅಣ್ಣ ದೊರೆ
ಕಂಡರವನು ಕೆರೆ
ಈಸಲೆಂದು ಹಾರದಿರನು
ಬಂದಿದ್ದರು ನೆರೆ !

ಚಿಟ್ಟೆಯಂಥ ಚಿತ್ರ —
ಉಲ್ಲಾಸದ ಮೊತ್ತ
ತುಂಬಿದಂಥ ಒಡನಾಡಿಗ—
ಇಲ್ಲದೆದೆಗೆ ಕುತ್ತ !

ಆಟದಿಂದ ಪಾಠ ಕಲಿತು
ದೊಡ್ಡವರಾದಾಗಲೂ
ಹೊಟ್ಟೆ ನಮ್ಮ ದೊಟ್ಟಿನಿಂದ—
ಬಿಟ್ಟಿರೆವಾವಾಗಲೂ !

ಬನ್ನಿರಿ ಒಡನಾಡಿಗಳೇ
ಚಾಚ ನೆಹರುವಾಗುವಾ !
ಅಥವಾ ವಿಜಯ ಲಕ್ಷ್ಮಿಯಾಗಿ
ಪರದೇಶಕೆ ಹೋಗುವಾ !

ಅವರು ಮಾಡಿ ಮುಗಿಸದಿರುವ
ಕೆಲಸ ಬಹಳ ಇದೆ;
ತಾಯಿನಾಡ ಭಕ್ತಿಯಿಂದ
ಮಾಡಲಿ ಅದನೆದೆ !

# ವೀರಗಾನ

ಭಾರತದ
ವೀರಕಂಲ
ಎಲ್ಲಿಹುದು ?— ಕೇಳು !
ಕನ್ನಡ ನೆಲ—
ದಲ್ಲಿಲ್ಲಂ—
ಬಾ ನಾಲಗೆ ಸೀಳು ॥ ಪ ॥

ಚಾಲುಕ್ಕರ
ಪುಲಕೇಶಿಯು
ಸೇನಾಬಲ ನಾವು !

ಹಕ್ಕ ಬುಕ್ಕ
ಭೂಪಾಲರ
ಮಕ್ಕಳಿದೋ ನಾವು !

ಹೊಯ್ಸಳರಾ
ಹೊಯ್ಗೆಗಳಿ—
ಗಾಗಿತ್ತಿದೆ ತಾವು !

ಕಂಠೀರವ—
ಗರ್ಜನೆ ಹಗೆ—
ಗಾರಿತ್ತೋ ಸಾವು ?

ಕಿತ್ತೂರಿನ
ಚೆನ್ನಮ್ಮನ
ಕರ ವಾಳಿನ ರಕ್ಷೆಯು !

ಓಬವ್ವನ
ಒನಕೆಯು ಹಲ್
ಮಿಂಚಿಸಿದಾ ಹೊಳಪು !

ಮತ್ತೆ ಮತ್ತೆ
ಹುಟ್ಟುತ್ತಿದೆ.
ಬೆಳೆಯುತ್ತಿದೆ ತೇಜ !

ಸ್ವಾಭಿಮಾನ
ಸೂಸುತಿಹು—
ದೀಯೆದೆಗೇ ಸಾಜ !

ಭಂಡರ ದುರ್—
ಮದವೆಂದೂ
ಸಭ್ಯತೆಯೆನ್ನಿಸದು !

ದುಂಡರ ನಾ—
ಡಿದು ಚಿಲ್ಲರೆ—
ತನವನು ಮನ್ನಿಸದು !

ನರಿತನ ನಾಯಕ್—
ತನಕಿಲ್ಲೆಡೆ
ಎಂದೆಂದೂ ಇಲ್ಲ !

ಕರಿಸಿಂಹಗ—
ಳೆಮಗೋರಗೆ—
ಮನೆ ಜಗವೆಮಗೆಲ್ಲ !

# ಬಾಳಿನ ಗುಟ್ಟು

ಒಡೆಯನ ಒಳ್ಳೆಯ ಬಾಳು
ಒಳ್ಳೆಯ ಒಕ್ಕಲಿಗಾಳು !

ಒಳ್ಳೆಯ ಮಾಲಕನಾರು ?
ಆಳಿಗೆ ಆದವ ಸೂರು !

ಧನಿಕನು ಕಟ್ಟಿದ ಸೂರು
ಬಡವರ ಬಳಕೆಯ ಊರು !

ತಾಯಂದಿರ ಮೊಲೆಹಾಲು
ಮಕ್ಕಳ ಹೊಟ್ಟೆಯ ಪಾಲು !

ಗುರುಗಳ ಹೃದಯದ ಪ್ರೀತಿ
ಶಿಷ್ಯರಿಗುತ್ಸವರೀತಿ !

ಹರಿಯುವ ಒರತೆಯ ನೀರು
ಮೇರುತಲದವರಿಗೆ ಕೀರು !

ದೇವರು ಮಾಡಿದ ತ್ಯಾಗ
ಲೋಕಕ್ಕಾಯಿತು ಭೋಗ !

ಬಸವಣ್ಣನ ಹೋರಾಟ
ಜನರಿಗೆ ಕೊಟ್ಟಿದೆ ಊಟ !

ಮಕ್ಕಳು ಕಲಿಯುವ ಪಾಠ
ಹಿರಿಯರ ಹೃದಯಕ್ಕೂಟ !

ಸರಿಯೋದಿನ ವಿಸ್ತಾರ
ನರಲೋಕದ ಉದ್ಧಾರ !

ಆಳಿನ ಬಾಳಿನ ರಕ್ಷೆ
ಒಡೆಯನ ಬಲಕಿಹ ದೀಕ್ಷೆ !

ಪ್ರಜೆಗಳ ಸುಖ ಸಂತೋಷ
ಪ್ರಭು ಚರಿತದ ನಿರ್ದೋಷ !

ಗರತಿತನದ ಪಡಿಕಟ್ಟು
ನಾಗರಿಕತೆ—ನೆಲಗಟ್ಟು !

ಚೊಕ್ಕಟ ಅರಿವಿನ ಮಟ್ಟು
ಒಳ್ಳಿಯ ಬಾಳಿನ ಗಂಟು !

ಗಂಡನು ದುಡಿದದ್ದೆಲ್ಲಾ
ಹೆಂಡತಿ—ಖರ್ಚಿಗೆ ಖುಲ್ಲಾ !

ಕವಿಗಳು ಕಟ್ಟಿದ ಹಾಡು
ಮಕ್ಕಳ ಬಾಯಿಗೆ ಲಾಡು !

# ಉತ್ಸಾಹ

ಏನಾಗಬೇಕಮ್ಮ
    ಏನಾಗಬೇಕು ?
ಏನಾಗಲೂ ಬಲ್ಲೆ
    ಹೇಳಿದರೆ ಸಾಕು ॥ಪ॥

ಮೀನಾಗಿ ಕಡಲೇಳ
    ಈಸಿ ಬರಕೇಳು;
ನಾನೀರ ಹಾರುವೆನು—
    ಹಾರುತಿದೆ ತೋಳು !
ಬಾನಾಡಿಯನ್ನೇರಿ
    ಬಾನೇರ ಬೇಕೆ ?
ಹೂಂ ನೋಡು ನಾಹಿಂದೆ
    ಬೀಳುವೆನದೇಕೆ ?
ಚಿಕ್ಕೆಗಳ ಮುತ್ತಿಟ್ಟು
    ಬರಬೇಕೆ ? ಹೇಳು—
ನಕ್ಕು ಮುಗಿಸುವೆನದನು,
    ನೋಡುತಿರು ತಾಳು !
ಹನುಮಪ್ಪನ ಕೂಡ
    ಹೋರಿಬಾ —ಎನ್ನು,
ಅನುಮಾನವಿಲ್ಲದೆಯೆ
    ಹೊರಡುವೆನು ಇನ್ನು !

ಆರುಂ ಶಾಸ್ತ್ರದಳನ್ನು

ಅರಿಯಬೇಕೇನು ?

ಈರೈದುಂ ದಿನದಲ್ಲಿ

ಅರಿತೇನು ನಾನು !

ನವಿಲಂತೆ ನಿನ್ನೆದುರು

ಕುಣಿಯಲೂ ಸಿದ್ಧ;

ಅವಿತು ಬೆಲ್ಲವ ತಿನ್ನು-

ವಲ್ಲಿ ನಾ ಗೊದ್ದ !

ಅಳಿಯಂತೆ ಹೂವುಗಳ

ಮೆಚ್ಚಲೂ ಬಲ್ಲೆ !

ಗಿಳಿಯಂತೆ ಉಲಿವುದಕೆ

ನನಗೆಲ್ಲಿ ಎಲ್ಲೆ ?

ನಿನ್ನ ಕಾವಲಿನಲ್ಲಿ

ವೀರ ಸರದಾರ—

ನನ್ನಪ್ಪ, ಈ ನಿನ್ನ

ಮುಂದಿಲ್ಲ ಸಂಹಾರ !

ನೀನು ಕೈಹಿಡಿ ದೆತ್ತ-

ಲಿರುವಾಗ ನನ್ನ,

ಏನಾಗಲಾರೆ ನಾ ?

ಎಲ್ಲೆನಗೆ ಬನ್ನ ?

# ಬೆಳಗಿನ ಕರೆ

ಏಳು ಏಳು, ತಂಗಾಳಿ ಕರೆಯುತ್ತಿದೆ
ತೀಡಿ ತೀಡಿ ತೀಡಿ—ತೆಳ್ಳಗೆ
ತೀಡಿ ತೀಡಿ ತೀಡಿ !
ಏಳು ಏಳು, ಚೆಂಬೆಳಗು ಹರಿಯುತ್ತಿದೆ
ಹಾಡಿ ಹಾಡಿ ಹಾಡಿ—ಮೆಲ್ಲಗೆ
ಹಾಡಿ ಹಾಡಿ ಹಾಡಿ ॥ ಪ ॥

ಹಕ್ಕಿಪಕ್ಷಿಗಳು ನಕ್ಕು ಕಲೆಯುತಿವೆ
ಮಕ್ಕಳಾಡಲೆಂದು—ಎಲ್ಲಾ
ಮಕ್ಕಳಾಡಲೆಂದು.
ರೆಕ್ಕೆಬೀಸಿ ಮರಿದುಂಬಿ ಬರುತಲಿದೆ
ಕುಶಲ ಕೇಳಲೆಂದು—ತಾನೇ
ಕುಶಲ ಕೇಳಲೆಂದು !
ಅದೋ ಮೂಡಲಿನ ಗಿರಿಯ ನೆತ್ತಿಯ-
ನ್ನೇರಿ ನಿಂತ ಭಾನು—ಎತ್ತರ-
ಕೇರಿ ನಿಂತ ಭಾನು !
ಉದಾರೇಕ್ಷಣದೆ ಕರೆಯುವನೆಲ್ಲರ
ಮೈಯತಡವಿ ತಾನು—ಕಂಗಳ
ನೀಡಿ ಕಾಂತಿಧೇನು !

ಹಸಿರ ಹಾದಿಯಲಿ ಸೂರ್ಯನ ಕುದುರೆ
ಹಾರಿತು ಕುಪ್ಪಳಿಸಿ—ಮೇಲಕೆ
ಹಾರಿತು ಕುಪ್ಪಳಿಸಿ !

ಹಸು ಹಾಲುಣಿಸುತ್ತಿದೆ ನಾಲಿಗೆಯಲಿ
ಕರುವನು ಚಪ್ಪರಿಸಿ—ತಪ್ಪದೆ
ಕರುವನು ಚಪ್ಪರಿಸಿ !

ಬೆಳಗಿನ ಮಲ್ಲಿಗೆ ಮುಗುಳು ನಗೆಯೊಳೇ
ಕರೆವಳು ತನ್ನೆಡೆಗೆ—ಬೆಡಗಿ
ಕರೆವಳು ತನ್ನೆಡೆಗೆ !

ಸುಳಿಗಾಳಿಯು ಮೂಲಕ ಕಳಿಸಿರುವಳು
ನರುಗಂಪಿನ ಕೊಡುಗೆ—ಮೂಗಿಗೆ
ನರುಗಂಪಿನ ಕೊಡುಗೆ !

ಮಾವಿನ ತೊಂಗಲು ಕುಹುಹೂ ರಾಗವ
ಕುಳಿತೇ ಜೀಕುತಿದೆ—ಸುಯ್ಯನೆ
ಕುಳಿತೇ ಜೀಕುತಿದೆ !

ಧಾವಿಸಿ ಸೊಪ್ಪಿಗೆ ಹೋಗುವ ಜನವೂ
ಕೂಹೂ ಹಾಕುತಿದೆ—ಕೂಡಲು
ಕೂಹೂ ಹಾಕುತಿದೆ !

ಬೆಳಗಿನ ಜಾವದ ಅಭ್ಯಾಸದ ದನಿ
ಮನೆಯಿಂ ಕೇಳುತಿದೆ—ಎಲ್ಲರ
ಮನೆಯಿಂ ಕೇಳುತಿದೆ !

ತೊಳೆಯುವ ಬಳಿಯುವ ತಾಯಿಂದಿರ ಬಳಿ
　　　　ಏಳಲು ಕೇಳುತಿದೆ—ಮಕ್ಕಳ
　　　　ಏಳಲು ಕೇಳುತಿದೆ!
ಸಿಂಗಾರಕೆ ರತ್ನಂಗಳ ಸುರಿದರು
　　　　ಕಾಣದು ಚೆಲ್ವಾತು—ಲೋಕಕೆ
　　　　ಕಾಣದು ಚೆಲ್ವಾತು!
ಮಂಗಲ ಕಾಲದ ರಂಗನು ಕಾಣದ
　　　　ಕಣ್ ಕರಟದ ತೂತು—ಟೊಣಪರ
　　　　ಕಣ್ ಕರಟದ ತೂತು!
ಏಳು ಬಣ್ಣದಾ ಬಿಲ್ಲನೆತ್ತಿರುವ
　　　　ಬಾನಿನೊಡೆಯು ನೋಡು— ಬಹುದ್ವಾರ
　　　　ಬಾನಿನೊಡೆಯು ನೋಡು!
ಬೋಳು ಬೇಣವೂ ಕನಸು ಕಾಣುತಿದೆ
　　　　ಬೆಳೆಯಿತೆಂದು ಕಾಡು—ತನ್ನಲಿ
　　　　ಬೆಳೆಯಿತೆಂದು ಕಾಡು!

# ಬೆಳುದಿಂಗಳೂಟ

ಹೂವ ಕೊಯ್ಯುವಾ
    ಹುಡುಗಿಯರೆಲ್ಲಾ
ಬನ್ನಿ ಸೂರ್ಯಕಡಲಲ್ಲಿಳಿದ !
ತಮ್ಮ ತಂಗಿಯರು
    ಕಾಯುತಲಿಹರು
ಚಂದ್ರ ಮೆಲ್ಲಮೆಲ್ಲನೆ ಹೊಳೆದ !
ಸಾಲೆ ತೋಟದಲಿ
    ಬೆಳ್ಳಿ ಚಿತ್ರಗಳ
ಚೆಲ್ಲಿದಂತೆ ಬೆಳುದಿಂಗಳಿದೆ !
ಬಾಲ ಬಾಲೆಯರು
    ಕುಳಿತು ಬೆಂಚಿನಲಿ
ಕತೆಯ ಹೇಳುತಿಹರೆಡೆಬಿಡದೆ !
ಗಿಡವು ತನ್ನ ಹ-
    ತ್ತೆಂದು ಕರೆದುದನು
ಹುಡುಗನೊಬ್ಬ ಹೇಳುತ್ತಿರುವ !
ಹೂವು ನಕ್ಕು ಅಣ-
    ಕಿಸಿದುದ ಹೇಳುವ—
ಳೊಬ್ಬಳು ಸಿಡಿದುರಿಯುತ್ತಿರುವ !

ಬೆಳುದಿಂಗಳ ಕೈ-
　　ತುತ್ತು ನೀಡಲು-
ಕೃವ್ವ ಇತ್ತಕಡೆ ಬರುತಿಹಳು !
ಮೊದಲ ತುತ್ತನವ-
　　ಳಾರಿಗೆ ಕೊಡುವಳೊ
ನೋಡುವ, ತೀಡುತ ಮುಂಗುರುಳು !
ಬೆಳುದಿಂಗಳ ಹಾ-
　　ಡನ್ನು ಹಾಡಿ ನಾವ್
ಕುಣಿವ ಕೈಹಿಡಿದು ನಲವಿಂದ !
ನಡುವೆ ಮಾಡಿ ಅ-
　　ಕೃವ್ವನನಜ್ಜಿಯು
ಹಿಡಿಯುವಾಟ ಆಡುವುದಂದ !
ನಕ್ಕು ನಲಿದು ಮನೆ-
　　ಗೋಡಿ ಅಮ್ಮನಿಗೆ
ನಮ್ಮ ಆಟಗಳ ಹೇಳೋಣ !
ರೆಕ್ಕೆಯಿಲ್ಲ ನಮ-
ಗೇಕೆ ? ಎಂದು ನ-
　　ಮ್ಮಪ್ಪನ ತಪ್ಪದೆ ಕೇಳೋಣ !

# ಗೆಳೆತನ

ಮಲೆನಾಡಿನ ಅಳಿ—
ಗಿಳಿಗಳ ಬಳಗದ
ಒಳನುಡಿ ಯಾವುದು ?
ಸಹಕಾರ !

ಚಿಲುಮಿನ ಜೋಳದ
ನೆಲದಲಿ ಬೆಳೆದಿಹ
ನವಧಾನ್ಯದ ದುಡಿ ?
ಸಹಕಾರ !

ರವಿ ಶಶಿ ತಾರಾ—
ಗ್ರಹ ನೀಹಾರಿಕೆ—
ತಿರುಗುವ ನೀತಿಯೊ ?
ಸಹಕಾರ !

ಕವಿದಡವಿಯೊಳಿಹ
ಖಗಮೃಗ ಸಂಕುಲ
ತುರುಗುವ ರೀತಿಯೊ ?
ಸಹಕಾರ !

ಹರಿಯುವ ನದಿನದ
ಕರೆದೊರೆಯುವುದೂ
ಸಹಗಮನಾಗತ
ಸಹಕಾರ !

ಮೆರೆದೆದ್ದಿಹ ಗುರು
೧೦ ಪಂಕ್ತಿಗಳೂ
ಸುರಿಸುವ ಮಳೆಗಿದೆ
ಸಹಕಾರ !

ಕಡಲಲೆಯೊಂದೂ
ಬಿಡಿಬಿಡಿ ಬಾರದು
ದಡವಪ್ಪಳಿಸಲು
ಸಹಕಾರ !

ಕಡಿವ ಗೊದ್ದವೂ
ನಡೆಯುದೊಂದೆ ಕಾ
ಅಡಿಯಿಟ್ಟಲ್ಲೀ
ಸಹಕಾರ !

ನಂಬಿ ಪರಸ್ಪರ
ಇಂಬುಗಳಾಗುವ
ಹಂಬಲಿನಲ್ಲೀ
ಸಹಕಾರ !

# ತೇರು-ಕಾರು

ಬರುತ್ತಿದೆ ಬರುತಿದೆ ಊರಿನ ತೇರು !
    ಕೊಳ್ಳುವೆ ನಾನೊಂದಾಟದ ಕಾರು ॥ ಪ ॥
ತಿರುಗುವನೊಬ್ಬನು ಹೆಗಲಲಿ ಹೊತ್ತು
    ಸಾವಿರ ಬಣ್ಣದ ಪುಗ್ಗೆಗಳ
ಕುಳಿತಿಹನೊಬ್ಬನು ಪೇರಿಸಿಕೊಂಡು
    ಲಕ್ಷ ಬತಾಸಿನ ಲಗ್ಗೆಗಳ !
ಹಕ್ಕಿಯು, ಹಾವಿನ, ಹುಲಿ, ಹುಲು ನರಿಗಳ
    ಮಕ್ಕಳ ಮಾಟದ ಗೊಂಬೆಗಳ
ಲೆಕ್ಕವೆ ಇರದಷ್ಟಿಟ್ಟಿಹನೊಬ್ಬನು—
    ಜೂಹಣ್ ಚಿಗುರಲೆ ರೆಂಬೆಗಳ
ಹೊತ್ತಿಹ ಗಿಡಮರ ಬಳ್ಳಿದಳೆಷ್ಟು !
    ಕೊಂಡರೆ ಮುಗಿಯುವುದುಂಟೇನು ?
ಇತ್ತರೆ ಬಡವನ ಮಕ್ಕಳಿಗವನವ
    ಪುಕ್ಕಟೆ, ಹೋಗುವ ಗಂಟೇನು ?
ನಾನಾ ಸ್ವರಗಳ ಪೀಪಿಗಳ
ನಾನಾ ಬಣ್ಣದ ಟೋಪಿಗಳ
    ನಾನಾ ಅಳತೆಯ ಕೋಟಿನ ಷರ್ಟಿನ
    ನಾನಾ ಬೆಡಗಿನ ಸೊಂಟದ ಬೆಲ್ಟಿನ
ಸಾಲಿಗೆ ಸಾಲೇ ತೋರುತ್ತಿದೆ !
ಬಾನೆತ್ತರ ಬಗೆ ಏರುತ್ತಿದೆ !
ಬಾಂಬು ಫಿರಂಗಿಗಳೊಂದು ಕಡೆ !

ಮೋಟಾರ್ ಬಸ್ಸಿನೊಂದು ಕಡೆ !
ವಿಮಾನ ಜಟಕಾ ರೈಲ್ ಬೇಕಾದರೆ
ತಿರುಗಿಸು ಮುಖವನ್ನತ್ತಕಡೆ !
ಪುಟಾಣಿ ರಾಜ್ಯದ ಪುಟ್ಟ ಸರಕುಗಳ
ಒಟ್ಟಿಹನಂಗಡಿಕಾರ, ನಡೆ !
ಹಬ್ಬದ ಖರ್ಚಿಗೆ ಅಪ್ಪನು ಕೊಟ್ಟಿಹ
ದುಡ್ಡೇನವುಗಳ ಕೊಂಡೀತೇ ? ಅವ
ಅಬ್ಬಬ್ಬಾ ಎದೆಯುಬ್ಬುತ್ತಿದೆ ! ಅವ
ಕೊಳ್ಳದೆ ನಿದ್ದೆಯು ಬಂದೀತೇ ?
ಬರುತಿದೆ ಎದುರಿಗೆ ದೇವರ ತೇರು !
ಎಳೆವವರಲಿ ನಮ್ಮಪ್ಪನ ತೋಳು !
ದೊಡ್ಡವನಾಗಲು ಕೊಳ್ಳುವೆ ಕಾರ,
ಹಾಕುವೆನದಕೆ ಪತಾಕೆಯು ಹಾರ
ತಿರುಗುವೆ ಮಂತ್ರಿಗಳಂದದಲಿ
ದೊಡ್ಡ ಬಂಗಲೆಗಳೆದುರಿನಲಿ !

# ಉಪಮೆ

ತೆಂಗಿನ ಹಾಗಿರಬೇಕು ತಲೆ,
ಮಾವಿನ ಹಾಗಿರಬೇಕು ಎದೆ;
ಕಂಗಿನ ಹಾಗಿರಬೇಕು ಹಿಡಿ,
ಮಲ್ಲಿಗೆಯಂತಿರಬೇಕು ನುಡಿ !

ಕಲ್ಲಿನ ಹಾಗಿರಬೇಕು ಧೃತಿ,
ಬಿಲ್ಲಿನ ಹಾಗಿರಬೇಕು ಮತಿ;
ಮೋಡದ ಹಾಗಿರಬೇಕು ಮುಡಿ,
ಮಿಂಚಿನ ಹಾಗಿರಬೇಕು ಅಡಿ !

ಬಾಳೆಯು ಹಾಗಿರುವುದು ಹೆಣ್ಣು;
ತಾಳೆಯು ಹಾಗಿರುವುದು ಗಂಡು:
ಬೆಂಕಿಯು ಹಾಗಿರುವುದು ಮಾನ,
ಗಾಳಿಯು ಹಾಗಿರುವುದು ಪ್ರಾಣ !

# ಸಿಹಿಂಗಡಲು

ಹತ್ತು ದೋಣಿ,
ಹಾಯಿ ಬಿಡು;
ತರಂಗ ಗಿರಿ ಕಂದರ

ಹತ್ತಿ ಇಳಿದು
ಸಾಗುವುದದು
ಬರುವ ವರೆಗೆ ಬಂದರ !

ಕಡಲಿನಲೆಯು
ಕಲೆಯ ಮುಂದೆ
ಮಾನವ ಕಲೆ ಬಡ !

ತಡಿಯು ಚಿತ್ರ–
ಲಿಪಿಯೋದಲು
ಬಲ್ಲನೊಬ್ಬ ವ್ಯಾಧ !

ಪ್ರಾಣಿಹಿಂಸೆ
ಪಾಪವೆಂಬ
ನುಡಿಗಿಲ್ಲಿಲ್ಲರ್ಥ !

ಮೀನಿಗೆ ಮೀ–
ನೇ ಭಕ್ಷಕ;
ಮೊಸಳೆಯೇ ಕಲಿಪಾರ್ಥ !

ಆದೆ ಮಾದರಿ
ಕಾರರವಗೆ;
ಅವ ಜಲಫಲವಂತ !
ಪರಶೋಷಕ
ಸಂಸ್ಕೃತಿಗವ–
ನಾಗಿಹನರುಹಂತ !
ಜಯಂಧವರ್ಣವ
ಪಾಲಿಸಿಯೇ
ಜಲವೆಲ್ಲಂಪ್ಪಯಿತು;
ನಯ ಸರ್ವೋ–
ದಯದಲ್ಲಿದೆ;
ಸಿಹಿ ಅದು—ನೆನಪಾಯಿತು !

# ಅಕಸ್ಮಾತ್ತು

ನಾನು ಅತ್ತಾಗಲೇ
ಬಾನು ಅತ್ತಿತ್ತು;
ಅದ ಕಂಡು ಮುತ್ತಿತ್ತು
ನಿದ್ದೆ ಹತ್ತಿತ್ತು!

ನಾನು ನಕ್ಕಾಗಲೇ
ಚಂದ್ರನೂ ನಕ್ಕ;
ಅದ ಕಂಡು ನಾ ನಕ್ಕು;
ಮುರಿದಿತ್ತು ಪಕ್ಕ!

ನಾನು ಹೊರಡಲು ತಮ್ಮ
ಹೊರಟ ಸಂಗಾತ;
ಅದ ಕಂಡು ನಾನೋಡಿ
ಬಿದ್ದೆನಂಗಾತ!

ನಾ ನೋಡುತಿರುವಾಗ
ನೋಡಿತ್ತು ಚುಕ್ಕೆ;
ಅದ ನೋಡೆ ತಲೆಯಿಂದ
ಬಿದ್ದಿತ್ತು ಕುಕ್ಕೆ!

ನಾನು ಎಚ್ಚತ್ತಾಗ
ಎದ್ದ ನಮ್ಮಪ್ಪ;
ಅದ ಕಂಡು ನಾನಾದೆ
ಬೆದರಿ ಬಲು ಬೆಪ್ಪ!

# ಪಾರ್ಲಿಮೆಂಟು

ಸೇರಲಿಂದು ಸೇರಲಿಂದು
ನಮ್ಮ ಪಾರ್ಲಿಮೆಂಟು;
ಆರು ಪಕ್ಷದವರ ಮೇಳ
ನಮ್ಮಲ್ಲೇ ಉಂಟು !
ಸಿಹಿಪ್ರಿಯರ ಪಕ್ಷವೊಂದು,
ಹುಳಿಪ್ರಿಯರದೊಂದು;
ಕಹಿಪ್ರಿಯರದಲ್ಪಸಂಖ್ಯೆ—
ಖಾರದವರದೊಂದು !
ಉಪ್ಪಿನವರ ಪಕ್ಷ ಕೂಡ
ಉಂಟು ಕೊಂಚ ದೊಡ್ಡದು;
ತಪ್ಪೇನೊಗರು ಪ್ರಿಯರದು
ಬಂದರೆ ! ತಡೆಯೊಡ್ಡದು !
ಸೇರಲೆಮ್ಮ ಪಾರ್ಲಿಮೆಂಟು
ನಿರ್ಣಯಿಸಲಿ ತಿಂಡಿಯು;
ಆರರ ಮೇಲೊಂದ ಹೇರಿ
ಬಿಡುವ ನಮ್ಮ ಬಂಡಿಯು !
ಒಂದು ತಿಂಡಿ ಎಲ್ಲರಿಗೂ—
ಬಹುಮತ ಸರ್ವಮತ;
ಒಂದು ಮಾತು ಎಲ್ಲರಿಗೂ—
ಐಕ್ಯಕ್ಕಿದೆ ಸಮ್ಮತ !

ಶೇಪ್ ಗಂಡುಗಳೆರಡಕ್ಕೂ
    ಒಂದೇ ವೇಷ ಸಾಕು;
ಶೋಸ್-ಮಣ್ಣುಗಳೆರಡರ ದರ
    ಸಮವಾಗಲೆ ಬೇಕು !
ಅಣುಬಾಂಬಿನ ಯುಗದೊಳಿಂದು
    ಬದುಕಬೇಕೊ ? ಹೇಳಿ—
ತೃಣವೆಂದೊಗೆಯುರಿ ಹರೆಯುದ;
    ಹೊಸ ವಿಚಾರ ಕೇಳಿ !
ಬಹುಮತವನು ಸಂಘಟಿಸುವ
    ಕಲೆಯು ಕಲಿಯುಲೇಳಿ;
ಬಹುಮಾನವು ಬಹುಮತಕ್ಕೆ—
    ಪ್ರಜಾರಾಜ್ಯ ಕೇಳಿ !
ಹಂಚಿರಿ ಚಾಕ್ಲೇಟುಗಳನು
    ಮತದಾನದ ಮುನ್ನ;
ಚಂಚಲ ಮತಿಗಳು ನಿಮಗೇ
    ಕೊಡುವರು ಮತವನ್ನ !

# ಯಕ್ಷಗಾನ

ತಾಳ ಬಾರಿಸಿ, ತಾಳ ಬಾರಿಸಿ.
    ನಾನು ಪದಗಳ ಹೇಳುವೆ !
ಮೇಳ ಕಟ್ಟೋಣಂತೆ ನಾವೂ—
    ಕರೆದು ಗೆಳೆಯರ ಕೇಳುವೆ !
ಪಂಚಪಾಂಡವ ಪಾತ್ರಕ್ಕೈವರು,
    ಕೌರವರ ಕುಲಕನಿಬರು;
ವಂಚನೆಯ ಜೂಜಿಗೆ ಶಕುನಿ ಬೇ-
    ಕಾರು ವಹಿಸಲು ಒರುವರು ?
ಹೆಣ್ಣು ಪಾತ್ರಕ್ಕಾರು ಸಿದ್ಧರು ?
    ಬಾಲಪಾತ್ರಕೊ ? ಎಲ್ಲರೂ !
ಕಣ್ಣುಕಾಣದ ರಾಜಪಾತ್ರವ
    ಧರಿಸಲಾರೂ ಒಲ್ಲರು !
ಏನು ನಾಚಿಕೆ ಹುಡುಗರಿಗೆ, ಬಿಗು-
    ಮಾನವೇಕೆ ? ಚುನಾವಣೆ
ತಾನು ತೋರಿಸಿಕೊಡುವುದಿಲ್ಲವೆ
    ಎಲ್ಲ ಪಾತ್ರದ ಧಾರಣೆ ?
"ಯಕ್ಷಗಾನದ ದೊರೆಗಳನ್ನೇ
    ಕಂಡು ಕಲಿತರು ಈವಿಯು
ರಕ್ಷಕರು ಆಳರಸ ವರ್ಗದ—
    ಬಲ್ಲಿರೇನೀ ಖೂಬಿಯು ? "

ಎಂದ ಕೂಡಲೆ ಬಂದರೆಲ್ಲರು
ಪಾತ್ರ ಧರಿಸಲು ಥಟ್ಟನೆ
ಅಂದು ದೀಪಾವಳಿಯು ಇರುಳಲಿ;
ಬನ್ನಿರಿಂದೂ ನೆಟ್ಟನೆ !
ಶ್ರುತಿ ನಿನಗೆ. ಮದ್ದಲೆಯು ಅವನಿಗೆ
ಭಾಗವತ ನಾನಾಗುವೆ;
ತತಿಕಿಟೋಂತರ ನನ್ನ ತಾಳವ
ಬಾರಿಸಲು ಮುಂದಾಗುವೆ !
ಉದ್ದನೆಯ ಪಾತ್ರಗಳೊಡನೆ ನಾ
ಕುಳ್ಳರನ್ನೂ ಕುಣಿಸುವೆ;
ಸದ್ದು ಮಾಡದೆ ಕಟ್ಟು ವೇಷವ
ಹರ್ಷರಸವನ್ನುಣಿಸುವೆ !

# ನಾವು

ನಾನು, ನನ್ನ ಅಕ್ಕ, ತಮ್ಮ
ಉಪ್ಪು, ಹುಳಿ, ಖಾರ!
ತಿರುಗಾಡಲು ಹೊರಟರೆ ನಾವ್
ತ್ರಿಮೂರ್ತಿಯವತಾರ !
ನಾನು, ನನ್ನ ಅಕ್ಕ, ತಮ್ಮ
ಕಾಗದ, ಮಸಿ, ಅಕ್ಷರ !
ನಾವ್ ಬರೆದುದ ಕೂಡಿಸಿದರೆ
ಓದುವುದೇ ದುಷ್ಕರ !
ನಾನು, ನನ್ನ ಅಕ್ಕ, ತಮ್ಮ
ಬೆಂಕಿ, ಗಾಳಿ, ನೀರು;
ಮೂವರು ಕೂಡಿದೆವೆಂದರೆ
ಮಳೆಗಾಲದ ಜೋರು !
ನಾನು, ನನ್ನ ಅಕ್ಕ, ತಮ್ಮ
ಮೂರು ರಾಜ್ಯದವರು;
ಆದರೆ ನಮ್ಮೆಲ್ಲರಿಗೂ
ಭಾರತವೇ ತವರು !

# ಮದುವೆ

ನೀನು ಬ್ರಾಹ್ಮಣ ನಾ ಲಿಂಗಾಯತ
ಅವ ಒಕ್ಕಲುಮಗ ಚಮ್ಮಾರ

ಇವ ಕುಂಬಾರನು ಇವಳು ದೀವಳೀ
ಹುಡುಗಿಯು ಅಪ್ಪನು ಕಮ್ಮಾರ

ಅಕ್ಕಸಾಲಿಗರ ಮಗಳೀ ಸುಂದರಿ
ಹರಿಜನರವಳಿಕೊ ಈ ಬೆಡಗಿ

ಲೆಕ್ಕಾಚಾರವ ಮಾಡಿ ಹೇಳುವೆನು
ಟೋಪಿಯು ತೆಗೆದೀಕಡೆ ಮಡಗಿ

ಈಕೆ ಹಿಂದುಳಿದ ಪೋರಿ ಈತ ಮುಂ—
ಬರಿದ ಪೋರ— ಇವರಿಗೆ ಮದುವೆ

ಮಾಡಿಸಿದನು ಕತೆಗಾರ ಜಾತಿಯುಮ—
ಹಳೆತನಕ್ಕೆ ಹೊಸತನದೊಡವೆ ?

ಕ್ಷತ್ರಿಯ ಹುಡುಗಿಯ ಮದುವೆಯಾಗಿ ತಾ
ಕಾಳಿದಾಸ ಕವಿಯಾದನಲ

ಅರಬ ಜೈನಳನು ಮದುವೆಯಾಗಿ ಭಟ್-
ಕಳ ನವಾಯತಿಕೆ ಪಡೆದ ಭಲಾ ?

ಇತಿಹಾಸವ ಪುನರಭಿನಯಿಸುವ ನಾವ್
ಹೊಸ ಸಮಾಜವನು ಕಟ್ಟುವೆವು

ಭಾರತವಶಾತೆಯಂ ಸೇವೆಗೆ ನಿಂತಿಹ
ಹೊಸ ಮಕ್ಕಳ ಬೆನ್ ತಟ್ಟುವೆವು,

ಬೆರಕೆ ಜಾತಿಯೇ ಭಾರತ ಜಾತಿಯಂ—
ಬೆರಸದೆ ಮಾರುವ ಹಾಲಿಹುದೇ ?
ಏರಕದಲ್ಲಿಯೂ ಬೆರಕೆ ಬಣ್ಣಗಳ
ತೋರದಿರುವ ಮೋಡಗಳಿವೆಯೇ ?

